# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | ೨೫೦ (೨೮೬) |
| ಸದಸ್ಯರ ಹೆಸರು | : | ಡಾ॥ ಜಯಮಾಲ ರಾಮಚಂದ್ರ |
| ಉತ್ತರಿಸುವ ದಿನಾಂಕ | : | ೦೪/೦೩/೨೦೨೦ |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಮಾಜ ಕಲ್ಯಾಣ ಇಲಾಖೆಯಿಂದ ನಡೆಯುತ್ತಿರುವ ವಿದ್ಯಾರ್ಥಿ ನಿಲಯಗಳ ಸಂಖ್ಯೆ ಎಷ್ಟು; | ಸಮಾಜ ಕಲ್ಯಾಣ ಇಲಾಖಾ ವತಿಯಿಂದ ನಡೆಯುತ್ತಿರುವ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ವಿವರ ಈ ಕೆಳಕಂಡತಿರುತ್ತದೆ. |

| ಕ್ರ.ಸಂ | ವಿವರ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|---|
| 1 | ಮೆಟ್ರಿಕ್ ಪೂರ್ವ | 1233 | 136 |
| 2 | ಮೆಟ್ರಿಕ್ ನಂತರ | 634 | 119 |
| | **ಒಟ್ಟು** | **1867** | **255** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಇವುಗಳಲ್ಲಿ ಬಹುತೇಕ ವಿದ್ಯಾರ್ಥಿ ನಿಲಯಗಳು ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನದಲ್ಲಿದೆಯೇ; ಇದರಿಂದ ವಿದ್ಯಾರ್ಥಿಗಳು ತೊಂದರೆಯನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ೦೨ ವಿದ್ಯಾರ್ಥಿನಿಲಯ ಕಟ್ಟಡಗಳು ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ವಿವರಗಳು ಈ ಕೆಳಕಂಡಂತಿರುತ್ತದೆ.<br>1. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಚೇಳೂರು, ಬಾಗೇಪಲ್ಲಿ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ.<br>2. ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ, ಹಿರೇಕೆರೂರು ಟೌನ್, ಹಾವೇರಿ ಜಿಲ್ಲೆ.<br><br>ಶಿಥಿಲಾವಸ್ಥೆಯಲ್ಲಿರುವ ಕಟ್ಟಡಗಳು ವಿದ್ಯಾರ್ಥಿಗಳ ವಾಸಕ್ಕೆ ಯೋಗ್ಯವಿಲ್ಲದಿರುವ ಬಗ್ಗೆ ಲೋಕೋಪಯೋಗಿ ಇಲಾಖೆಯ ವತಿಯಿಂದ ನೀಡಲಾಗಿರುವ ಪ್ರಮಾಣ ಪತ್ರವನ್ನು ಆಧರಿಸಿ, ನೆಲಸಮಗೊಳಿಸಲು ಹಾಗೂ ಲಭ್ಯವಾಗುವ ಸ್ಥಳದಲ್ಲಿ ಹೊಸ ಕಟ್ಟಡಗಳನ್ನು ನಿರ್ಮಾಣ ಮಾಡಲು ಕ್ರಮ ವಹಿಸಲಾಗಿದೆ. ಹೊಸ ಕಟ್ಟಡಗಳ ನಿರ್ಮಾಣ ಕಾಮಗಾರಿ ಪೂರ್ಣಗೊಳ್ಳುವವರೆಗೂ ವಿದ್ಯಾರ್ಥಿಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒಳಗೊಂಡ ಬಾಡಿಗೆ ಕಟ್ಟಡಗಳಲ್ಲಿ ವಾಸ್ತವ್ಯ ಕಲ್ಪಿಸಲು ಕ್ರಮ ವಹಿಸಲಾಗುವುದು.<br><br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ 255 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಇದರಲ್ಲಿ 168 ವಿದ್ಯಾರ್ಥಿನಿಲಯಗಳು ಸ್ವಂತ ಕಟ್ಟಡದಲ್ಲಿ ಹಾಗೂ 87 |

| | | |
|---|---|---|
| | | ವಿದ್ಯಾರ್ಥಿನಿಲಯಗಳು ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿದ್ದು, ಇದರಲ್ಲಿ 71 ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ. ಸ್ವಂತ/ಬಾಡಿಗೆ ಕಟ್ಟಡಗಳಲ್ಲಿರುವ ವಿದ್ಯಾರ್ಥಿನಿಲಯಗಳ ಕಟ್ಟಡಗಳು ಗುಣಮಟ್ಟದಿಂದ ಕೂಡಿದ್ದು ಯಾವುದೇ ವಿದ್ಯಾರ್ಥಿನಿಲಯಗಳ ಕಟ್ಟಡಗಳು ಶಿಥಿಲಾವಸ್ಥೆಯಲ್ಲಿರುವುದಿಲ್ಲ. ಮುಂದುವರೆದು 2019-20 ನೇ ಸಾಲಿನಲ್ಲಿ ವಿದ್ಯಾರ್ಥಿನಿಲಯಗಳ ಕಟ್ಟಡಗಳ ದುರಸ್ಥಿ ಹಾಗೂ ಉನ್ನತೀಕರಣ ಕಾಮಗಾರಿಗಳನ್ನು ರೂ.18.67 **ಕೋಟಿಗಳ ವೆಚ್ಚದಲ್ಲಿ ಕೈಗೊಳ್ಳಲು ಕ್ರಮವಹಿಸಲಾಗಿದೆ.** |
| ಇ) | **ವಿದ್ಯಾರ್ಥಿ ನಿಲಯಗಳಲ್ಲಿ ಶುಚಿತ್ವಕ್ಕೆ ಹಾಗೂ** ಕುಡಿಯುವ ನೀರಿನ ವ್ಯವಸ್ಥೆಗಳು ಸರಿಯಾಗಿಲ್ಲದ ಕಾರಣ ಈ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | **ವಿದ್ಯಾರ್ಥಿನಿಲಯಗಳಲ್ಲಿ ಶುಚಿತ್ವ ಹಾಗೂ ನಿಲಯಾರ್ಥಿಗಳಿಗೆ ನೀಡುವ ಸೌಲಭ್ಯಗಳನ್ನು ನೀಡುವ** ಸಂಬಂಧ ಸರ್ಕಾರದ ಆದೇಶ ಸಂಖ್ಯೆ:ಸಕಇ 172 ಪಕವಿ 2013, ದಿನಾಂಕ: 28-11-2014 ರಲ್ಲಿ ದರಗಳನ್ನು ಪರಿಷ್ಕರಿಸಿ ಆದೇಶಿಸಲಾಗಿದೆ. ಸದರಿ ಆದೇಶದನ್ವಯ 100 ಸಂಖ್ಯಾಬಲದವರೆಗಿನ ವಿದ್ಯಾರ್ಥಿನಿಲಯಗಳಿಗೆ ಮಾಹೆಯಾನ ರೂ.2000/- ಗಳಂತೆ ಹಾಗೂ 100 ಸಂಖ್ಯಾಬಲಕ್ಕಿಂತ ಹೆಚ್ಚಿಗೆ ಇರುವ ವಿದ್ಯಾರ್ಥಿನಿಲಯಗಳಿಗೆ ಮಾಹೆಯಾನ ರೂ.2500/-ರಂತೆ ನಿಲಯಗಳ ಸ್ವಚ್ಛತೆಗಾಗಿ ವೆಚ್ಚ ಭರಿಸಲಾಗುತ್ತಿದೆ.<br><br>ಮುಂದುವರೆದು, 100 ಸಂಖ್ಯಾಬಲದವರೆಗಿನ ವಿದ್ಯಾರ್ಥಿನಿಲಯಗಳಿಗೆ ಮಾಹೆಯಾನ ರೂ.750/- ಗಳಂತೆ ಹಾಗೂ 100 ಸಂಖ್ಯಾಬಲಕ್ಕಿಂತ ಹೆಚ್ಚಿಗೆ ಇರುವ ವಿದ್ಯಾರ್ಥಿನಿಲಯಗಳಿಗೆ ಮಾಹೆಯಾನ ರೂ.1000/- ರಂತೆ ಸ್ವಚ್ಛತೆಗಾಗಿ ಖರೀದಿಸಬೇಕಾದ ಸಾಮಾಗ್ರಿ ವೆಚ್ಚ ಭರಿಸಲಾಗುತ್ತಿದೆ. ಈ ರೀತಿ ಪ್ರತಿ ನಿಲಯಕ್ಕೆ ವೆಚ್ಚವನ್ನು ಭರಿಸಿ ವಿದ್ಯಾರ್ಥಿನಿಲಯಗಳ ಶುಚಿತ್ವಕ್ಕೆ ಕ್ರಮ ತೆಗೆದುಕೊಳ್ಳಲಾಗಿದೆ.<br><br>ಇಲಾಖೆಯ ಎಲ್ಲಾ ವಿದ್ಯಾರ್ಥಿನಿಲಯಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆಯನ್ನು ಕಲ್ಪಿಸಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ:ಸಕಇ 54 ಪಕವಿ 2020(ಭಾಗ), ದಿನಾಂಕ:07-02-2020ರಲ್ಲಿ ವಾಟರ್ ಪ್ಯೂರಿಫೈಯರ್ ಇಲ್ಲದೇ ಇರುವ 198 ವಿದ್ಯಾರ್ಥಿನಿಲಯಗಳಿಗೆ ರೂ.2.98 ಕೋಟಿಗಳ ವೆಚ್ಚದಲ್ಲಿ ಕೆಟಿಪಿಪಿ ನಿಯಮಾನುಸಾರ ಜಿಲ್ಲಾಮಟ್ಟದಲ್ಲಿ ಖರೀದಿಸಲು ಅನುದಾನ ಒದಗಿಸಲಾಗಿದೆ. |
| ಈ | ವಿದ್ಯಾರ್ಥಿ ನಿಲಯಗಳನ್ನು ವ್ಯವಸ್ಥಿತವಾಗಿ ಇಡಲು ಸರ್ಕಾರದ ಅನುದಾನದ ಕೊರತೆ **ಕಾರಣವೆಂಬುದು ಸರ್ಕಾರದ ಗಮನಕ್ಕೆ** ಬಂದಿದೆಯೇ? | ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯಗಳ ನಿರ್ವಹಣೆಗೆ ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಕ್ರಿಯಾ ಯೋಜನೆಗಳಲ್ಲಿ ಸಮರ್ಪಕವಾಗಿ ಅನುದಾನವನ್ನು ಒದಗಿಸಿಕೊಳ್ಳಲಾಗಿರುತ್ತದೆ. ನಿಲಯಗಳ **ನಿರ್ವಹಣೆಗೆ** ಅನುದಾನ **ಕೊರತೆ** ಉಂಟಾದಲ್ಲಿ ರಾಜ್ಯವಲಯದಿಂದ ಬಿಡುಗಡೆ **ಮಾಡಲು** ಅಗತ್ಯ **ಅನುದಾನ** ಒದಗಿಸಿಕೊಳ್ಳಲಾಗಿದೆ. |

ಸಕಇ 122 ಪಕವಿ 2020

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು